ಮುಂಜಾವು
ವಾರಪತ್ರಿಕೆ.
ಸಂಪಾದಕ: ಸಿರಿಮನೆ ನಾಗರಾಜ್

'MUNJAVU' Kannada Weekly. KOPPA - CHM. ಫೋನ್: 114
6ನೇ ವರ್ಷ 1ನೇ ಸಂಚಿಕೆ ಕೊಪ್ಪ 16-8-1987 ಭಾನುವಾರ ಬೆಲೆ 25 ಪೈಸೆ

## ಕಾಫಿ ಬೆಳೆ ಕೀಟಗಳ ಹತೋಟಿಗೆ ಸಲಹೆ

ಚಿಕ್ಕಮಗಳೂರು ಜಿಲ್ಲೆಯ ಕಾಫಿ ಬೆಳೆಯುವ ಪ್ರದೇಶಗಳಲ್ಲೆಲ್ಲಾ ಈ ಸಾಲಿನ ಮಳೆ ಬಹಳ ನಿರಾಶಾದಾಯಕವಾಗಿದೆ. ಇದೇ ಪರಿಸ್ಥಿತಿ ಮುಂದುವರಿದರೆ, ಅರೇಬಿಕಾ ಮತ್ತು ರೊಬಸ್ಟಾ ಕಾಫಿಯಲ್ಲಿ ಹಸಿರು ಮತ್ತು ಬಿಳೀ ಹೊಟ್ಟೆನ ತಿಗಣೆ ಮತ್ತು ರೊಬಸ್ಟಾ ಕಾಫಿಯಲ್ಲಿ ಗುಂಡು ರಂಧ್ರ ಕೊರಕಗಳು ಹೆಚ್ಚುವ ಸಾಧ್ಯತೆಯಿದೆ. ಮಳೆಯ ಸಂಪೂರ್ಣ ಅಥವಾ ಭಾಗಶಃ ವಿಫಲತೆ ಮುಂದುವರಿದಲ್ಲಿ, ಅರೇಬಿಕಾ ಕಾಫಿಯ ಮುಖ್ಯ ಕೀಟ, ಕಾಂಡ ಕೊರೆಯುವ ಬಿಳೀ ಬೋರರ್ ನ ದುಂಬಿ ನಿಗದಿತ ಕಾಲಕ್ಕಿಂತ ಮುಂಚಿತವಾಗಿ ಹೊರಬರುವ ಸಾಧ್ಯತೆಯಿದೆ.

ಈ ವಿಚಾರದಲ್ಲಿ, ಎಲ್ಲಾ ಬೆಳೆಗಾರರೂ ಹೆಚ್ಚಿನ ನಿಗಾ ಇಟ್ಟು, ಪರಿಣಾಮಕಾರಿಯಾದ ಯಾಂತ್ರಿಕ/ರಾಸಾಯನಿಕ ಹತೋಟಿ ಕ್ರಮಗಳನ್ನು ಅನುಸರಿಸಬೇಕು.

ಅರೇಬಿಕಾ ಕಾಫಿಯಲ್ಲಿ ಬೋರರ್ ಹುಳುವಿನ ಬಲಿತ ದುಂಬಿ ಹಾರುವ ಸಮಯ ಅನುಸರಿಸಿ ಗಿಡಗಳಿಗೆ ಬಿ. ಎಚ್. ಸಿ./ಲಿಂಡೇನ್ ಹೆಚ್ಚಬೇಕಾದ ಕಾಲವನ್ನು ಸೂಕ್ತವಾಗಿ ಅಳವಡಿಸಿಕೊಳ್ಳಬೇಕು.

ಈ ವಿಚಾರದಲ್ಲಿ ಹೆಚ್ಚಿನ ತಾಂತ್ರಿಕ ಮಾಹಿತಿಗಾಗಿ ಕಾಫಿ ಮಂಡಳಿಯ ಸಂಪರ್ಕಾಧಿಕಾರಿಗಳನ್ನು ಸಂಪರ್ಕಿಸಬಹುದು.

ಶೃಂಗೇರಿ ತಾ. ವ್ಯ. ಮಾ. ಸ. ಸಂಘ — ಕೆ. ವಿ. ರಾಮಪ್ಪಯ್ಯ "ಬೇಜವಾಬ್ದಾರಿ ಹೇಳಿಕೆ"

# ಆರೋಪ ಸಾಬೀತಿಗೆ ಆಡಳಿತ ಮಂಡಳಿ ಸವಾಲು

**ಶೃಂಗೇರಿ: ಇಲ್ಲಿನ ತಾ|| ವ್ಯವಸಾಯೋತ್ಪನ್ನ ಮಾರಾಟ ಸಹಕಾರ ಸಂಘದಲ್ಲಿ 25 ಲಕ್ಷ ರೂ. ಅವ್ಯವಹಾರ ನಡೆದಿದೆಯೆಂದು ಜಿ. ಪ. ಸದಸ್ಯ ಕೆ. ವಿ ರಾಮಪ್ಪಯ್ಯ ಜು. 25 ರ ಪರಿಷತ್ ಸಭೆಯಲ್ಲಿ ಆರೋಪಿಸಿರುವುದು "ಬೇಜವಾಬ್ದಾರಿತನ" ಎಂದು ಸಂಘದ ಕಾರ್ಯಕಾರಿ ಮಂಡಳಿ ಉಗ್ರವಾಗಿ ಖಂಡಿಸಿದೆ.**

"ಈ ಆರೋಪಗಳು ಸತ್ಯಕ್ಕೆ ದೂರವಾಗಿದ್ದು, ದುರುದ್ದೇಶದಿಂದ ಕೂಡಿವೆ. ಆದಾಗ್ಯೂ, ಅವ್ಯವಹಾರದ ದೂರುಗಳ ಬಗ್ಗೆ ಲೋಕಾಯುಕ್ತದಿಂದಾಗಲಿ, ಯಾವುದೇ ಇಲಾಖೆಯ ವತಿಯಿಂದಲೇ ಆಗಲಿ, ತನಿಖೆ ನಡೆಸುವುದನ್ನು ನಾವು ಸ್ವಾಗತಿಸುತ್ತೇವೆ. ಆರೋಪಗಳು ಸಾಬೀತಾದಲ್ಲಿ ಅಧ್ಯಕ್ಷರೂ ಸೇರಿ ಪೂರ್ತಿ ಮಂಡಳಿ ರಾಜೀನಾಮೆ ಕೊಡುತ್ತೇವೆ. ಅಂತೆಯೇ ಸಂಘದ ಕಾರ್ಯದರ್ಶಿ ಅಥವಾ ಇತರ ಸಿಬ್ಬಂದಿಯ ಮೇಲಿನ ಆರೋಪ ದೃಢಪಟ್ಟರೆ ಅವರ ಮೇಲೆ ಉಗ್ರಕ್ರಮ ತೆಗೆದುಕೊಳ್ಳುತ್ತೇವೆ" ಎಂದು ಮಂಡಳಿ ಭರವಸೆ ಕೊಟ್ಟಿದೆ.

**"ಒಂದು ವೇಳೆ ಆರೋಪ ಸಾಬೀತಾಗದಿದ್ದಲ್ಲಿ, ರಾಮಪ್ಪಯ್ಯ ಹೇಳಿಕೊಂಡಂತೆ ರಾಜೀನಾಮೆ ಕೊಡಬೇಕು"** ಎಂದೂ ಮಂಡಳಿ **ಸವಾಲು ಹಾಕಿದೆ.**

ಈ ವಿಚಾರಗಳ ಬಗ್ಗೆ ಸಂಘದ ಅಧ್ಯಕ್ಷ ಸುರೇಂದ್ರ ನೀಡಿರುವ ಸ್ಪಷ್ಟನೆಗಳ ಸಾರಾಂಶ ಇಲ್ಲಿದೆ:

33 ಲಕ್ಷ ರೂ. ವ್ಯವಹಾರವಾಗಿದ್ದು, 25 ಲಕ್ಷ ರೂ. ನಷ್ಟವಾಗಿದೆ ಎಂದು ರಾಮಪ್ಪಯ್ಯ ಹೇಳಿರುವುದು ಎಷ್ಟು ಬಾಲಿಶವಾದುದೆಂದು ಸಾರ್ವಜನಿಕರು ಗಮನಿಸುತ್ತಾರೆ. ಹಿಂದಿನಿಂದಲೂ ನಷ್ಟದಲ್ಲೇ ನಡೆಯುತ್ತಾ ಬಂದಿರುವ ಈ ಸಂಘ ಇನ್ನೂ 54 ಸಾವಿರ ರೂ. ನಷ್ಟದಲ್ಲಿದೆ. ನಾವು 83-84 ರಲ್ಲಿ ಅಧಿಕಾರ ವಹಿಸಿಕೊಂಡಿದ್ದು, ಈ ಮೂರು ವರ್ಷ 23.45 ಲಕ್ಷ, 22.56 ಲಕ್ಷ ಮತ್ತು 30.30 ಲಕ್ಷ ರೂ. ವ್ಯವಹಾರವಾಗಿದೆ. ಕ್ರಮವಾಗಿ, 5196 ರೂ. ನಷ್ಟ, 22,390 ರೂ. ಲಾಭ ಮತ್ತು 25,855 ರೂ. ಲಾಭ ಉಂಟಾಗಿದೆ. 1986-87ರ ಆಡಿಟ್ ಆಗುತ್ತಿದ್ದು, 20 ಸಾವಿರಕ್ಕೂ ಅಧಿಕ ಲಾಭ ಬರುವ ನಿರೀಕ್ಷೆ ಇದೆ.

### ಬಿಕ್ಕಟ್ಟಿನಲ್ಲಿ ಬಂಡವಾಳ

ಸಂಘದಲ್ಲಿ ಬಂಡವಾಳ ಬಹಳ ಕಡಿಮೆಯಿರುವುದಲ್ಲದೆ ಇದ್ದ ಬಂಡವಾಳವೂ ಸರ್ಕಾರಿ ಇಲಾಖೆಗಳಲ್ಲಿ ಮತ್ತು ಹಳ್ಳಿಗಳ ವ್ಯ. ಸೇ. ಸ. ಸಂಘಗಳಲ್ಲಿ ಉಳಿದುಕೊಳ್ಳುತ್ತಿದೆ. ಹೀಗೆ, ಒಟ್ಟು 1 ಲಕ್ಷ 80 ಸಾವಿರ ರೂ. ನಿಂತಿದೆ. ಈ ಹಣ ಯಾವಯಾವಾಗಲೋ ಬರುತ್ತದೆ. ನಾವು ಮಾತ್ರ ಡಿ. ಸಿ. ಸಿ. ಬ್ಯಾಂಕಿನ 2.5 ಲಕ್ಷ ರೂ. ಸಾಲಕ್ಕೆ ಶೇ. 16 ರಂತೆ ಸುಮಾರು 40 ಸಾವಿರ ರೂ. ಬಡ್ಡಿಯನ್ನೇ ಕಟ್ಟಬೇಕಾಗುತ್ತದೆ. ಇದಲ್ಲದೆ ಹಿಂದಿನ ಮೂವರು ಕಾರ್ಯದರ್ಶಿಗಳು ದುರುಪಯೋಗ ಮಾಡಿರುವ ಹಣ 45 ಸಾವಿರ ರೂ. ಇದೆ. 2.07 ಲಕ್ಷ ರೂ. ವೆಚ್ಚದಲ್ಲಿ ಮೂರು ಕಟ್ಟಡ ನಿರ್ಮಾಣವಾಗಿದೆ. (ಶೃಂಗೇರಿ-2, ಹೊಳೆಕೊಪ್ಪ-1) ಹೀಗೆ ಖರ್ಚು ಮತ್ತು ಬಾಕಿ ಒಟ್ಟು 4.37 ಲಕ್ಷ ಆಗುತ್ತದೆ.

ಆದರೆ ಬಂಡವಾಳ ಇರುವುದು 4.05 ಲಕ್ಷ ಮಾತ್ರ. ಸದಸ್ಯರ ಶೇರು ಹಣ ಹಿಂದೆ 14 ಸಾವಿರ ರೂ. ಮಾತ್ರ ಇದ್ದುದು, ಈ ಅವಧಿಯಲ್ಲಿ 22 ಸಾವಿರಕ್ಕೇರಿದೆ. ಇದು ಬಿಟ್ಟರೆ, ಸಿಬ್ಬಂದಿಗಳ ಭದ್ರತಾ ಠೇವಣಿ 10 ಸಾವಿರ ರೂ. ಇದೆ.

ನೆರೆಯ ಹರಿಹರಪುರ, ಕೊಪ್ಪ ಮುಂತಾದ ಸೊಸೈಟಿಗಳಲ್ಲಿ ಸಾರ್ವಜನಿಕರ ಲಕ್ಷಗಟ್ಟಲೆ ಹಣ ಠೇವಣಿ ಇದೆ. ಇಲ್ಲಿ ಮೊದಲಿನಿಂದಲೂ ನಷ್ಟದಲ್ಲಿರುವುದರಿಂದ ಯಾರೂ ಠೇವಣಿ ಇಡುವುದಿಲ್ಲ. ಹೀಗಾಗಿ ಬಂಡವಾಳದ ತೀವ್ರ ಕೊರತೆಯೇ ಈ ಸಂಘ ಸದಾ ನಷ್ಟ ಅನುಭವಿಸಲು ಮುಖ್ಯ ಕಾರಣವಾಗಿದೆ

### ಲಾಭವೊಂದೇ ಗುರಿಯಲ್ಲ

ಇದಲ್ಲದೆ, ಸಹಕಾರ ಸಂಘದಲ್ಲಿ ಲಾಭ ಮಾಡುವುದೇ ಗುರಿಯಲ್ಲ. ನಾವು ಪಡಿತರ ಹಂಚಿಕೆಯನ್ನು ವ್ಯವಸ್ಥಿತವಾಗಿ ನಡೆಸಿಕೊಂಡು ಬರುತ್ತಿದ್ದೇವೆ. ಇದಕ್ಕಾಗಿ 5 ಶಾಖೆಗಳನ್ನು ಹೊಸದಾಗಿ ತೆರೆದಿದ್ದೇವೆ. ಇದರಿಂದ ರೈತರಿಗೆ, ಸಾರ್ವಜನಿಕರಿಗೆ ಉಪಯೋಗವಾಗುತ್ತಿದೆಯಾದರೂ ಸಂಘಕ್ಕೆ ನಷ್ಟ ಮಾತ್ರ.

ಅದರಲ್ಲೂ ಈ ಸಂಘದ ವ್ಯವಹಾರದಲ್ಲಿ ಶೇ. 90ರಷ್ಟು ಬರೀ ಪಡಿತರ ವಸ್ತುಗಳು ಹಾಗೂ ಗೊಬ್ಬರಗಳದೇ ಆಗಿದೆ. ಇದರಲ್ಲಿ ಲಾಭಾಂಶ ಅತ್ಯಲ್ಪ. ಅವನ್ನು ಹಳ್ಳಿಗಳ ಶಾಖೆಗಳಲ್ಲಿಟ್ಟು ಮಾರುವಾಗ ಅಲ್ಲಿನ ಬಾಡಿಗೆ, ಸಿಬ್ಬಂದಿ ಸಂಬಳ ಕೂಡ ಗಟ್ಟದೆ ನಷ್ಟವಾಗುತ್ತೆ. ಬೇರೆ ಬಾಬಿನಿಂದ ಬರುವ ಅಲ್ಪಸ್ವಲ್ಪ ಲಾಭ ಸಿಬ್ಬಂದಿಯ ಸಂಬಳ (40 ಸಾವಿರ) ಮತ್ತು ಸಾರಿಗೆ ವೆಚ್ಚಕ್ಕೇ ಹೋಗುತ್ತದೆ.

### ಗೊಬ್ಬರ

ರಸಗೊಬ್ಬರ ಅಂಗಡಿಗಿಂತ ಇಲ್ಲಿ ದುಬಾರಿ ನಿಜ. ಬಂಡವಾಳವಿಲ್ಲದೆ, ಫ್ಯಾಕ್ಟರಿಯಿಂದ ನೇರವಾಗಿ ತರಲಾಗದೆ ಫೆಡರೇಶನ್ನಿನಿಂದ ತರುವುದರಿಂದ ಕೆಲವು ಸಂದರ್ಭಗಳಲ್ಲಿ ಹೀಗಾಗುತ್ತೆ. ಆದರೆ ಸೊಸೈಟಿಯಲ್ಲಿ ಗೊಬ್ಬರ ಸ್ಟಾಕ್ ಮುಗಿದಿದೆಯೆಂದು ಗೊತ್ತಾದೊಡನೆ ವ್ಯಾಪಾರಿಗಳು ಬೆಲೆ ಹೆಚ್ಚಿಸುವ ವಿದ್ಯಮಾನ ನೋಡಿದವರಿಗೆ, ನಾವು ಪರೋಕ್ಷವಾಗಿ ಬೆಲೆ ನಿಯಂತ್ರಣ ಉಂಟುಮಾಡುವುದಾದರೂ ಅರಿವಾಗುತ್ತೆ.

### ಗೋಣಿ ಚೀಲ

ಇನ್ನು ರಾಮಪ್ಪಯ್ಯ ಹೇಳುವಂತೆ ಗೋಣಿ ಚೀಲದಲ್ಲಿ ಅವ್ಯವಹಾರವೂ ಆಗಿಲ್ಲ, ನಷ್ಟವೂ ಇಲ್ಲ. 6 ಸಾವಿರ ರೂ. ಲಾಭವೇ ಬಂದಿದೆ. 1981-82ರಲ್ಲಿ ಆಹಾರ ನಿಗಮದಿಂದ ಲೆವಿ ಭತ್ತ ಸಂಗ್ರಹಣೆಗಾಗಿ ತಲಾ 5 ರೂ. ದರದಲ್ಲಿ 4400 ಚೀಲ ಕೊಟ್ಟು 22,000 ರೂ. ಲೆಕ್ಕಕ್ಕೆ ಹಾಕಿದ್ದರು. ಲೆವಿ ಜೊತೆ ವಾಪಸು ಕೊಟ್ಟ 2182 ಚೀಲಕ್ಕೆ ತಲಾ 10 ರೂ. ನಂತೆ 21820 ರೂ. ವಾಪ್ಸು ಬಂದಿದೆ. ಕಳೆದ ವರ್ಷದ ಮಹಾಸಭೆ ನಿರ್ಣಯದಂತೆ 2000 ಚೀಲ ಹರಾಜಿಗೆ 6000 ರೂ. ಬಂದಿದೆ. ಅದನ್ನೇ ಅಕ್ಕಿ ತುಂಬಿ ಕಳಿಸಿದ್ದರೆ, ಆಹಾರ ನಿಗಮದಿಂದ 10 ರೂ. ದರ ಸಿಗುತ್ತಿತ್ತು. ಆದಾಗ್ಯೂ ಒಟ್ಟಾರೆ ಈ ಬಾಬತ್ತಿನಲ್ಲಿ 5820 ರೂ. ಲಾಭ ಬಂದು ಇನ್ನೂ 218 ಚೀಲ ಉಳಿದಿವೆ.

### ಅಗ್ಗದ ಪ್ರಚಾರಕ್ಕೆ – ಅವಿವೇಕ

ಈ ಎಲ್ಲ ಅಂಕಿ-ಅಂಶ ಒದಗಿಸಿದ ಅಧ್ಯಕ್ಷರು, ತಮ್ಮ ಅವಧಿಯಲ್ಲಿ ಸಂಘಕ್ಕೆ ಕಟ್ಟಿಸಿದ ಸ್ವಂತ ಕಟ್ಟಡಗಳು, ಶಾಖೆಗಳು, ಲಾಭ ಗಳಿಸಿ ಹಳೆಯ ನಷ್ಟವನ್ನು ತೊಡೆಯುತ್ತಿರುವುದು, ಸಿಬ್ಬಂದಿಯ (ಉದ್ಯೋಗಾವಕಾಶದ) ಹೆಚ್ಚಳ, ಮುಂತಾದ ಸಾಧನೆಗಳನ್ನು ಪಟ್ಟಿ ಮಾಡುತ್ತಾರೆ.

ರಾಮಪ್ಪಯ್ಯ ಅಗ್ಗದ ಜನಪ್ರಿಯತೆಗಾಗಿ, ಯಾವ ವಿಚಾರವನ್ನೂ ವಿವೇಚಿಸದೆ ಬೇಜವಾಬ್ದಾರಿಯಿಂದ ಆರೋಪ ಮಾಡಿದ್ದಾರೆ. ಸದಾ ನಷ್ಟದಲ್ಲಿರುವ ಈ ಸಂಘದ ಬಗ್ಗೆ ಯಾರು ಏನು ಹೇಳಿದರೂ ಜನ ನಂಬುವಂಥ ಪರಿಸ್ಥಿತಿಯಿದೆ. ಇದರ ಏಳ್ಗೆಯ ಬಗ್ಗೆ ಇವರಾರಿಗೂ ಕಾಳಜಿಯಿಲ್ಲ. ಕಡೇ ಪಕ್ಷ ಸಂಘದಿಂದ ಅಂಕಿ-ಅಂಶಗಳನ್ನು ತರಿಸಿಕೊಂಡಾದರೂ ಆರೋಪ ಮಾಡಬಹುದಿತ್ತು — ಎನ್ನುತ್ತಾರೆ.

ನಾನು ಅವರಿಗೆ ಫೋನಿನಲ್ಲಿ ಬೆದರಿಕೆ ಹಾಕಿಲ್ಲ. ಸುಳ್ಳು ಸುಳ್ಳು ಅಂಕಿ-ಅಂಶ ಕೊಟ್ಟು ಆರೋಪಿಸಿದ್ದೀರಲ್ಲ ಎಂದು ನಾನು ಆಕ್ಷೇಪಿಸಿದ್ದಕ್ಕೆ ವೈಯಕ್ತಿಕವಾಗಿ ಮಾತಾಡಿದರು. ಆಗ ನಾನು, 'ನೈತಿಕವಾಗಿ, ಸಾರ್ವಜನಿಕ ರಂಗದಲ್ಲಿ ನಿಮಗಿಂತ ನಾನು ಯೋಗ್ಯನಾಗಿದ್ದೇನೆ. ನೀವು ಭೂ ಬ್ಯಾಂಕ್ ಅಧ್ಯಕ್ಷರಾಗಿ ಹಂಚಿನಮನೆ ಸುಬ್ರಮಣ್ಯಂ ಮನೆ ಮುರಿದಂತೆ ನಾನು ಯಾರ ಮನೆಯನ್ನೂ ಮುರಿದಿಲ್ಲ. ಸೊಸೈಟಿ ಅಧ್ಯಕ್ಷನಾಗದಿದ್ದರೂ ನನ್ನದೇ ಬಂಡವಾಳದಿಂದ ಮಿಲ್ ಕಟ್ಟುತ್ತಿದ್ದೆ' ಎನ್ನುವಷ್ಟರಲ್ಲಿ ಫೋನ್ ಇಟ್ಟರು.

ಇದನ್ನೇ ಅವರು 'ಬೆದರಿಕೆ' ಎಂದುಕೊಂಡರೆ ಯಾರೇನು ಮಾಡಲಾದೀತು ? ಎನ್ನುತ್ತಾರೆ ಸುರೇಂದ್ರ.

## ಶೃಂಗೇರಿ ತಾಲ್ಲೂಕು ರೈತರಿಗೆ ಸಲಹೆ

ಶೃಂಗೇರಿ: ಜೂನ್, ಜುಲೈ ತಿಂಗಳುಗಳಲ್ಲಿ ಮಳೆ ವಿಫಲವಾದ ಪ್ರಯುಕ್ತ ಆಗಸ್ಟ್, ಸೆಪ್ಟೆಂಬರ್‌ಗಳಲ್ಲಿ ಉತ್ತಮ ಮಳೆಯಾದಲ್ಲಿ ಆ ಪರಿಸ್ಥಿತಿಗೆ ಹೊಂದಿಕೊಳ್ಳುವ ಈ ಕೆಳಗಿನ ಬೆಳೆಗಳನ್ನು ಬೆಳೆಯುವಂತೆ ಶೃಂಗೇರಿ ತಾಲ್ಲೂಕಿನ ರೈತರಿಗೆ ಕೃಷಿ ಇಲಾಖೆ ಸಲಹೆ ಮಾಡಿದೆ.

ಆಗಸ್ಟ್: ಮಕ್ಕಿಗದ್ದೆ ಮತ್ತು ಮಧ್ಯಂತರ ಗದ್ದೆಗಳಲ್ಲಿ ಸಾಕಷ್ಟು ನೀರು ಇಲ್ಲದಿದ್ದಲ್ಲಿ ರಾಗಿಯ ಇಂಡಾಫ್ 5 ಮತ್ತು 9 ಮತ್ತು ಪಿ ಆರ್ 202 ತಳಿಗಳನ್ನು ಆಗಸ್ಟ್ 15 ರವರೆಗೆ ಬಿತ್ತನೆ ಮಾಡಬಹುದು.

ಸಿ-152 ಅಲಸಂಡೆ, ಡೆಕ್ಕಾನ್ 101 ಮತ್ತು 103 ಮುಸುಕಿನ ಜೋಳವನ್ನು ಬಿತ್ತನೆ ಮಾಡಬಹುದು. ಸಾಕಷ್ಟು ನೀರು ಒದಗುವ ಕಡೆ ಮುಂಗಾರು ಭತ್ತವನ್ನು ಆಗಸ್ಟ್ 15 ರವರೆಗೆ ಬಿತ್ತನೆ ಮಾಡಬಹುದು. ಸೆಪ್ಟೆಂಬರ್: ಸಿ 152 ತಳಿ ಅಲಸಂಡೆ ಮತ್ತು ಸೂರ್ಯಕಾಂತಿ (ಮಾರ್ಡೆನ್) ತಳಿ ಬಿತ್ತನೆ ಮಾಡಬಹುದು.

## ಪ್ರೌ॥ ಶಾಲಾ ವಿದ್ಯಾರ್ಥಿಗಳಿಗೆ ಪ್ರಬಂಧ ಸ್ಪರ್ಧೆ

"ವನಮಹೋತ್ಸವ"ಕ್ಕೆ ಸಂಬಂಧಿಸಿದಂತೆ ಸಂಬಾರ ಮಂಡಳಿಯು 8, 9, ಹಾಗೂ 10 ನೇ ತರಗತಿಯಲ್ಲಿ ಓದುತ್ತಿರುವ ವಿದ್ಯಾರ್ಥಿಗಳಿಗೆ ಕನ್ನಡ, ಇಂಗ್ಲೀಷ್, ಹಿಂದಿ, ಮಲೆಯಾಳಂ ಹಾಗೂ ತಮಿಳು ಭಾಷೆಗಳಲ್ಲಿ ಪ್ರಬಂಧ ಸ್ಪರ್ಧೆಯನ್ನು ಏರ್ಪಡಿಸಿದೆ "ಮಾನವನ ಜೀವನದಲ್ಲಿ ವೃಕ್ಷಗಳ ಹಾಗೂ ಅರಣ್ಯಗಳ ಪಾತ್ರ" (Role of Trees and Forests in Human Life) ಎಂಬುದು ಪ್ರಬಂಧ ಸ್ಪರ್ಧೆಯ ವಿಷಯವಾಗಿರುತ್ತದೆ.

ಪ್ರಬಂಧ 1,500 ಪದಗಳಿಗೆ ಮೀರಿರಕೂಡದು. ವಿದ್ಯಾರ್ಥಿಯ ಹೆಸರು ಹಾಗೂ ವಿಳಾಸವನ್ನು ಪ್ರಬಂಧ ಬರೆಯುವ ಯಾವುದೇ ಹಾಳೆಯಲ್ಲಿ ಬರೆಯದೆ ಪ್ರತ್ಯೇಕ ಹಾಳೆಯಲ್ಲಿ ಬರೆದು ಪ್ರಬಂಧದ ಜೊತೆ ಸೇರಿಸಬೇಕು. ಹಾಳೆಯ ಒಂದೇ ಮಗ್ಗುಲಲ್ಲಿ ಬರೆಯಬೇಕು.

ವಿದ್ಯಾರ್ಥಿ ಓದುತ್ತಿರುವ ಶಾಲೆಯ ಮುಖ್ಯಸ್ಥರ ಸರ್ಟಿಫಿಕೇಟ್‌ನೊಡನೆ ಪ್ರಬಂಧವನ್ನು ಕಳುಹಿಸಬೇಕು.

ಪ್ರಬಂಧವನ್ನು **ಸಂಪಾದಕರು, "ಏಲಕ್ಕಿ", ಸಂಬಾರ ಮಂಡಳಿ, ಸೈಂಟ್ ವಿನ್ಸೆಂಟ್ ಕ್ರಾಸ್ ರೋಡ್, ಕೊಚ್ಚಿನ್-682018, ಕೇರಳ,** ಈ ವಿಳಾಸಕ್ಕೆ ಕಳುಹಿಸಬೇಕು. ಪ್ರಬಂಧವನ್ನು ಸ್ವೀಕರಿಸುವ ಕಡೆಯ ದಿನಾಂಕ : 30–8 1987.

ಬಹುಮಾನಗಳು : ಮೊದಲ ಬಹುಮಾನ : 500 ರೂ.; ಎರಡನೆ ಬಹುಮಾನ : 300 ರೂ ; ಮೂರನೇ ಬಹುಮಾನ: 200 ರೂ.ಗಳು.

ಪ್ರತಿಯೊಂದು ಭಾಷೆಗೂ ಪ್ರತ್ಯೇಕ ಬಹುಮಾನವಿರುತ್ತದೆ. ಹೆಚ್ಚಿನ ವಿವರಗಳನ್ನು ಮೇಲ್ಕಂಡ ವಿಳಾಸದಿಂದ ಪಡೆಯಬಹುದು.

## ಜಯಪುರ ಮಂ. ಪಂ. ಪ್ರಥಮ ಸಭೆ: ನೀರಿನ ವ್ಯವಸ್ಥೆಗೆ ಪ್ರಥಮ ಆದ್ಯತೆ

ಜಯಪುರ : ಆ. 9ರಂದು ಇಲ್ಲಿನ ಮಂಡಲ ಪಂಚಾಯ್ತಿಯ ಪ್ರಥಮ ಸಭೆ ನಡೆದು ಇಲ್ಲಿನ ನೀರಿನ ವ್ಯವಸ್ಥೆಗೆ ಪ್ರಥಮ ಆದ್ಯತೆಯನ್ನು ನೀಡಲಾಯ್ತು (ಈ ಬಗ್ಗೆ 12.7.87 ರ 'ಮುಂಜಾವು'ನಲ್ಲಿ ಬಂದ ವರದಿಯನ್ನು ಸ್ಮರಿಸಬಹುದು.)

ಪೌರ ಕಾರ್ಮಿಕನ ನೇಮಕ, ಬೀದಿ ದೀಪದ ವ್ಯವಸ್ಥೆಯನ್ನು ಮಾಡಬೇಕೆಂದು ತೀರ್ಮಾನಿಸಲಾಯ್ತು. ಜಿಲ್ಲಾ ಪರಿಷತ್ತಿನಿಂದ ಮಂಜೂರಾದ 4 'ಬೋರ್‌ವೆಲ್' ಗಳನ್ನು ತೋಡಿಸುವ ಬಗ್ಗೆ ಚರ್ಚಿಸಲಾಯಿತಲ್ಲದೆ 18 ಮಂದಿಗೆ ಮಂಜೂರಾದ ಐ.ಆರ್.ಡಿ.ಪಿ. ಸಾಲವನ್ನು ಸೂಕ್ತ ವ್ಯಕ್ತಿಗಳಿಗೆ ವಿತರಿಸಬೇಕೆಂದು ತೀರ್ಮಾನಿಸಲಾಯ್ತು.

ಸಭೆಯ ಅಧ್ಯಕ್ಷತೆಯನ್ನು ಮಂಡಲ ಪ್ರಧಾನರಾದ ಎ. ಸಿ. ವಜ್ರಪ್ಪ ವಹಿಸಿದ್ದರು. ಜಿಲ್ಲಾ ಪರಿಷತ್ ಸದಸ್ಯ ಎಚ್.ಎಂ. ಮಾಸ್ತಿಯವರು ಸಭೆಯಲ್ಲಿ ಭಾಗವಹಿಸಿದ್ದರು. (ವರದಿ : ಕೃಷ್ಣ ಭಂಡಾರಿ)

## 'ಶ್ರೀ ಸಮಂತಭದ್ರ ವಾಣಿ'ಯ ಅದೃಷ್ಟ ಬಹುಮಾನ ಯೋಜನೆಯ ಫಲಿತಾಂಶ

ನಂ. 2881 | ಬಹುಮಾನ
" 145 || ಬಹುಮಾನ
" 1621 ||| ಬಹುಮಾನ

ಈ ಮೇಲ್ಕಂಡ ನಂಬರುಗಳಿಗೆ ಬಹುಮಾನಗಳು ಬಂದಿರುತ್ತವೆ. ಅವರು ಕೂಡಲೇ ತಿಳಿಸುವುದು.



## ಕೊಪ್ಪ ಪಶುವೈದ್ಯ ಶಾಲೆಯ ಸಂಚಾರಿ ಪಶು ಚಿಕಿತ್ಸಾ ಘಟಕದ ಚಲನ ಪಟ್ಟಿ

(ಜೀಪ್ ನಂ. ಸಿ ಎ ಜಿ 3848) **ಭೇಟಿ ಕೊಡುವ ಸಿಬ್ಬಂದಿ ವರ್ಗ :** ಸಹಾಯಕ ಪಶು ವೈದ್ಯರು, ಸಂಚಾರಿ ಪಶು ಚಿಕಿತ್ಸಾ ಘಟಕ

| ವಾರ | ಹೊರಡುವ ಸ್ಥಳ | ಭೇಟಿ ಕೊಡುವ ಹಳ್ಳಿಗಳ ಹೆಸರು ಮತ್ತು ಸಮಯ | | | | | | |
|---|---|---|---|---|---|---|---|---|
| ಮಂಗಳವಾರ | ಕೊಪ್ಪ : 7.30 ಬೆ. | ಕೊಂಡಗುಳಿ 7.45–8.15 | ಕೆಸವೆ 8.30–9 | ಸಿದ್ಧರಮಠ 9.15–9.45 | ಕರಿಗೆರಸಿ 10–10.30 | ಹಳ್ಳಿಬೈಲು 11–11.30 | ನಾಗರಮಕ್ಕಿ 11.45–12.15 |
| | | ಕುದುರೆಗುಂಡಿ 12.30–1.00 | | ಗುಣವಂತೆ ರಸ್ತೆ 3–3 30 | ಸಣ್ಣಕೇರಿ 3.45–4.15 | ಗುಣವಂತೆ 4.30–5 | ಗೋಳಿಕೊಪ್ಪ 5.15–5.45 |
| ಬುಧವಾರ | ಕೊಪ್ಪ 7.30 ಬೆ. | ನಿಲುವಾಗಿಲು 8.30–9.45 | ಶಾನುವಳ್ಳಿ 9 30–10.15 | ಬಿಲಗದ್ದೆ 10.30–11.15 | ಮೇಲ್‌ಬಿಳ್ರೆ 11.30–12.15 | ದಾಸನಕೊಡಿಗೆ 12.30–1.15 | ಹೊಸಕೊಪ್ಪ 3–3.45 |
| ಗುರುವಾರ | ಕೊಪ್ಪ 7.30 ಬೆ. | ಹೇರೂರು 8.15–9 | ಗದ್ದೆಮನೆ 9.10–10 | ಬಸರಿಕಟ್ಟೆ 10.30–11.30 | ಬಿಳಾಲುಕೊಪ್ಪ 12–12.45 | ಕೊಗ್ರೆ 1.15–2 | ಗುಡ್ಡೆತೋಟ 2.15–3 |
| ಶುಕ್ರವಾರ | ಜಯಪುರ 7.30 | ಅಗಳಗಂಡಿ 8–8.45 | ಹೆಗ್ಗಾರುಕೊಡಿಗೆ 9–9.45 | ಭೈರೇದೇವರು 10–10.45 | ಮೇಗೂರು 11–11.45 | ಎತ್ತಿನಟ್ಟೆ 1–1.45 | ಬೆಳವಿನಕೊಡಿಗೆ 2–2.45 |
| | | ಉತ್ತಮೇಶ್ವರ 3–3.45 | ಬಿ. ಜಿ. ಕಟ್ಟೆ 4–4.45 | | | | |
| ಶನಿವಾರ | ಕೊಪ್ಪ 7.30 | ಸೂರ್ಯದೇವಸ್ಥಾನ 8–8.30 | ದೋರಗಲ್ 8.45–9 15 | ಗಡೀಕಲ್ 9.30–10 | ಗಣಪತಿಕಟ್ಟೆ 10.15–10.45 | ಕವಡೆಕಟ್ಟೆ 11–11.30 | ಹೊಕ್ಕಳಿಕೆ 12–12.30 |
| | | ಹುಲಗೋಡು 12 45–1.15 | ಬೊಮ್ಲಾಪುರ 1.30–2 | ಹಿರೇಕೊಡಿಗೆ 2.15–2.45 | ಸೂರಿಕೊಪ್ಪ 3–3.30 | | |

ಸೂಚನೆ :
1. ವಾಹನದ ತಾಂತ್ರಿಕ ತೊಂದರೆ ಮತ್ತಿತರ ಅನಿವಾರ್ಯತೆಗಳಿಂದ ನಿಗದಿತ ವೇಳೆ ಮತ್ತು ಕಾರ್ಯಕ್ರಮದಲ್ಲಿ ಅಲ್ಪಸ್ವಲ್ಪ ವ್ಯತ್ಯಾಸಗಳಾಗಬಹುದು.
2. ಈ ಮೇಲಿನ ಚಿಕಿತ್ಸಾ ಕಾರ್ಯಕ್ರಮದೊಂದಿಗೆ ಬೆದೆಗೆ ಬಂದ ಜಾನುವಾರುಗಳಿಗೆ ಕೃತಕ ಗರ್ಭಧಾರಣಾ ಸೌಲಭ್ಯವನ್ನು ಸಹ ನೀಡಲಾಗುವುದು.
3. ಸಂಚಾರಿ ಪಶು ಚಿಕಿತ್ಸಾ ಘಟಕವು ಮೇಲೆ ಸೂಚಿಸಿದ ಸ್ಥಳಗಳಲ್ಲಿ ಮಾತ್ರ ನಿಲ್ಲುವುದು.

—ಸಂ॥ ನಿರ್ದೇಶಕರು, ಪಶು ವೈದ್ಯ ಇಲಾಖೆ, ಕೊಪ್ಪ

ಸಂಪಾದಕ, ಮುದ್ರಕ ಮತ್ತು ಪ್ರಕಾಶಕ: ಸಿರಿಮನೆ ನಾಗರಾಜ್, ಅಚ್ಚು: ಶ್ರೀ ಶಿಗ ಅಚ್ಚುಕೂಟ, ಕೊಪ್ಪ